

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 418
ಮಾನ್ಯ ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು).
ಉತ್ತರಿಸುವ ದಿನಾಂಕ : 15.09.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಂದಾಯ ಇಲಾಖೆಯ ಗ್ರಾಮ ಲೆಕ್ಕಾಧಿಕಾರಿಗಳು ಹಾಗೂ ದ್ವಿತೀಯ ದರ್ಜೆ ಸಹಾಯಕರುಗಳ ವೇತನವು ಒಂದೇ ಶ್ರೇಣಿಯದ್ದಾಗಿದ್ದು, ಪದೋನ್ನತಿ ನೀಡುವಾಗ ಮಾತ್ರ ಜೇಷ್ಠತಾ ಪಟ್ಟಿಯನ್ನು ಬೇರ್ಪಡಿಸಿ ಪದೋನ್ನತಿಯನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರದಿಂದ ತೆಗೆದುಕೊಂಡ ಕ್ರಮವೇನು; (ವಿವರಗಳನ್ನು ನೀಡುವುದು) | ಬಂದಿದೆ.<br><br>ಕಂದಾಯ ಇಲಾಖೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ The Karnataka Revenue Subordinate Branch Services (Recruitment) Rules 1977ರ ಅನುಸೂಚಿಗೆ ತಿದ್ದುಪಡಿ ತರುವ ಮೂಲಕ ಕಂದಾಯ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರು ಮತ್ತು ಗ್ರಾಮಲೆಕ್ಕಿಗರು ಈ ಎರಡೂ ವೃಂದ ಒಂದೇ ಜೇಷ್ಠತಾ ಪಟ್ಟಿಯನ್ನು (ಸಂಯುಕ್ತ ಜೇಷ್ಠತಾ ಪಟ್ಟಿ) ತಯಾರಿಸಿ ಸೇವಾ ಹಿರಿತನದ ಆಧಾರದ ಮೇಲೆ ಬಡ್ತಿ ನೀಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 15.03.2021ರಂದು ಜರುಗಿದ ವೃಂದ ಪರಿಶೀಲನಾ ಸಮಿತಿಯ ಸಭೆಯಲ್ಲಿ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಕಾನೂನು ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳ ಇಲಾಖೆಯ ಪ್ರತಿನಿಧಿಗಳೊಂದಿಗೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗಿದೆ.<br><br>ಅದರಂತೆ, ಸಚಿವ ಸಂಪುಟದ ಅನುಮೋದನೆ ಪಡೆದು, ಕರಡು ಅಧಿಸೂಚನೆಯನ್ನು ದಿನಾಂಕ: 29.07.2021ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿರುತ್ತದೆ. |

| | | |
|---|---|---|
| (ಆ) | ಕಂದಾಯ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಮತ್ತು ರಾಜಸ್ವ ನಿರೀಕ್ಷಕರು(ರವರ) ಜೇಷ್ಠತಾ ಪಟ್ಟಿಯು ಒಂದೇ ಆಗಿದ್ದು, ಒಂದೇ ಜೇಷ್ಠತಾ ಪಟ್ಟಿಯಂತೆ ಉಪ ತಹಶೀಲ್ದಾರ್ ಹುದ್ದೆಗೆ ಪದೋನ್ನತಿ ನೀಡಲಾಗುತ್ತಿರುವ ವಿಚಾರ ಸರ್ಕಾರದ ಗಮನದಲ್ಲಿದೆಯೇ; ಅದೇ ರೀತ್ಯಾ ಗ್ರಾಮಲೆಕ್ಕಿಗರು ಹಾಗೂ ದ್ವಿತೀಯ ದರ್ಜೆ ಸಹಾಯಕರ ಜೇಷ್ಠತಾ ಪಟ್ಟಿಯನ್ನು ಒಗ್ಗೂಡಿಸಲು ಇರುವ ಅಡೆತಡೆಗಳೇನು; | ಹೌದು.<br><br>The Karnataka Revenue Subordinate Branch Services (Recruitment) (Amendment) Rules 2021ನ್ನು ದಿನಾಂಕ:29.07.2021ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದ್ದು, ಕರಡು ತಿದ್ದುಪಡಿಗೆ ಸ್ವೀಕೃತಗೊಂಡಿರುವ ಆಕ್ಷೇಪಣೆ / ಸಲಹೆ ಸೂಚನೆಗಳು ಪರಿಶೀಲನೆಯಲ್ಲಿದ್ದು, ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತದೆ. |
| (ಇ) | ಗ್ರಾಮಲೆಕ್ಕಿಗರ ಹಾಗೂ ದ್ವಿತೀಯ ದರ್ಜೆ ಸಹಾಯಕರ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ನಿಯಮವು ಸಚಿವರ ಸಂಪುಟದಲ್ಲಿ ಅನುಮೋದನೆಗೊಂಡು, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚುರಪಡಿಸಿದಂತೆ ಅಧಿಸೂಚನೆ ಸಂಖ್ಯೆ: ಕಂಇ 20 ಬಿಎಸ್‌ಐ 2021, ದಿನಾಂಕ: 29.07.2021ರ ಕರಡು ಅಧಿಸೂಚನೆಯಂತೆ ಯಾವ ಕಾಲಮಿತಿಯಲ್ಲಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗುವುದು? | |

ಸಂಖ್ಯೆ: ಕಂಇ 168 ಬಿಎಸ್‌ಐ 2021

(ಆರ್.ಅಶೋಕ)
ಕಂದಾಯ ಸಚಿವರು